ರಾವ್ ಸಾಹೇಬ್, ರಾವ್ ಬಹದ್ದೂರ್
ರಾಜಚರಿತ ವಿಶಾರದ

# ಸಿ. ಹಯವದನರಾವ್



ಹೆಚ್. ಜೆ. ರಾಮಯ್ಯಂಗಾರ್

ರಾಜಚರಿತ ವಿಶಾರದ, ರಾವ್ ಸಾಹೇಬ್, ರಾವ್ ಬಹದ್ದೂರ್

# ಸಿ. ಹಯವದನರಾವ್

## (1865 – 1946)

### ( ಜೀವನ ಮತ್ತು ಸಾಧನೆ )


ಲೇಖಕ – ಪ್ರಕಾಶಕ :

**ಹೆಚ್. ಜೆ. ರಾಮಯ್ಯಂಗಾರ್**

೧೧೭/೫ಎ, ನಾಗರಾಜ ವಿಸ್ತರಣ

ಬಸವನಗುಡಿ ಬೀದಿ ಅಡ್ಡರಸ್ತೆ

ಬೆಂಗಳೂರು - ೫೬೦ ೦೧೯

ದೂರವಾಣಿ : ೬೬೧೩೦೨೫

A book on Rajacharita Visharada, Rao Saheb, Rao Bahaddur C. HAYAVADANA RAO, written and Published by H. J. Ramaiengar, 117/5A, Nagaraja Layout, Bull Temple Road Cross, Bangalore-560 019. Phone: 6613025

First Published : 1997 Price : Rs. 10/-

Copies : 500

Pages : 32

*This book is Published with the financial assistance of*

**Smt. C. SETHU BAI**

wife of H. Vasudeva Rao Athre and daughter-in-law of
C. Hayavadana Rao
No 145, Athre Nivas, 1st Main Road
Kempegowdanagar, Bangalore-560 019
Phone: 6678046

Printed by:

ILA Printers

153, 4th Main, 8th Cross
Chamarajapet, Bangalore-560 018
Phone: 623159



ರಾಜಚರಿತ ವಿಶಾರದ, ರಾವ್ ಸಾಹೇಬ್, ರಾವ್‌ಬಹದ್ದೂರ್
ಸಿ. ಹಯವದನರಾವ್ ಮತ್ತು ವಿಜಿಬಾಯಿ ದಂಪತಿಗಳ ತೃತೀಯ ಪುತ್ರ,
ದಿವಾನ್ ಸರ್ ಎಂ. ವಿಶ್ವೇಶ್ವರಯ್ಯನವರ ಆದರ್ಶ ಶಿಷ್ಯ,
ವಿವಿಧ ವಿಷಯಗಳನ್ನು ಕುರಿತ ವಾರ ಪತ್ರಿಕೆಗಳ ಅಂಕಣಕಾರ,
ತಂದೆ ಪ್ರಾರಂಭಿಸಿದ ಮೈಸೂರು ಆರ್ಥಿಕ ವಿಮರ್ಶಾ ಪತ್ರಿಕೆಯ ಸಂಪಾದಕ,
ಉತ್ತಮ ಲೇಖಕ ಹಾಗೂ ಪುಸ್ತಕ ವಿಮರ್ಶಕ,
ಜಾತೀಯತೆ, ಪ್ರಾದೇಶಿಕತೆ, ಭಾಷಾಂಧತೆ, ಭ್ರಷ್ಟಾಚಾರ, ದುಂದುವೆಚ್ಚ,
ಆಡಂಬರ, ಆಲಸ್ಯ, ನಿಷ್ಕ್ರಿಯತೆಗಳ ಕಡು ವಿರೋಧಿ,
ಪೌರ ಸಮಸ್ಯೆಗಳ ಬಗ್ಗೆ ಜಾತಿಮತ ಭೇದವಿಲ್ಲದೆ ಬಡವರ ಪಕ್ಷಪಾತಿ,
ಸರಳ ಜೀವನ, ಉತ್ತಮ ಚಿಂತನೆಗಳ ಸಮರ್ಥಕ,
ಕೈಕೆಳಗಿನ ಹತ್ತಾರು ಗುಮಾಸ್ತರ, ಬೆರಳಚ್ಚುಗಾರರ ನೆಚ್ಚಿನ ನಾಯಕ

**ಹೆಚ್. ವಾಸುದೇವರಾವ್ ಅತ್ರೆ**

(1917 – 1992)

ಇವರ ಸವಿನೆನಪಿಗಾಗಿ

# ಅರಿಕೆ

ಬೆಂಗಳೂರಿನ ಗವೀಪುರಂ ಗುಟ್ಟಹಳ್ಳಿ (ಕೆಂಪೇಗೌಡನಗರ)ಯಲ್ಲಿ ವಾಸವಾಗಿರುವ ನಾನು, ಇದೇ ವಿಸ್ತರಣದಲ್ಲಿ ವಾಸವಾಗಿದ್ದು, ಭಾರತದಲ್ಲೇ ಅಲ್ಲದೆ ಬ್ರಿಟನ್, ಅಮೆರಿಕಗಳಲ್ಲೂ ಪ್ರಸಿದ್ಧಿ ಪಡೆದಿದ್ದ, ಹಯವದನರಾಯನ ಬಗ್ಗೆ ಈ ಸಣ್ಣ ಪುಸ್ತಕವನ್ನು ಬರೆದು ಪ್ರಕಟಿಸುವ ಅವಕಾಶ ದೊರೆತುದಕ್ಕಾಗಿ ಹರ್ಷ ಪಡುತ್ತೇನೆ. ಈ ಪುಸ್ತಕವನ್ನು ಬರೆದು ಪ್ರಕಟಿಸಲು ಪ್ರೇರೇಪಣೆ ಮಾಡಿ ಎಲ್ಲ ರೀತಿಯಲ್ಲಿ ಸಹಾಯ ಮಾಡಿದ ಶ್ರೀಮತಿ ಸೇತೂಬಾಯಿ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಆದರ್ಶ ವ್ಯಕ್ತಿ ಎನಿಸಿದ ರಾಯರ ಪ್ರಭಾವವು ನಮ್ಮ ಯುವಜನರ ಮೇಲೆ ಆಗಿ, ಅವರು ಜನಸೇವೆ ಮಾಡಲು ಸಾಧ್ಯವಾಗಲೆಂದು ಆಶಿಸುತ್ತೇನೆ.

ಇದನ್ನು ಅಂದವಾಗಿ ಮುದ್ರಿಸಿಕೊಟ್ಟ ಇಳಾ ಪ್ರಿಂಟರ್ಸ್ ಮಾಲೀಕರಾದ ಶ್ರೀ ಬಿ. ಗುರುಮೂರ್ತಿ, ಕರಡು ಪ್ರತಿಗಳನ್ನು ತಿದ್ದಿದ ಶ್ರೀ ಬಿ. ಜಿ. ಮಳಲಿಗೌಡ ಮತ್ತು ಅಲ್ಲಿಯ ಸಿಬ್ಬಂದಿ ವರ್ಗ ಎಲ್ಲರಿಗೂ ನಾನು ಕೃತಜ್ಞನಾಗಿದ್ದೇನೆ.

ಬೆಂಗಳೂರು-೧೯
ಮೇ ೮, ೧೯೯೭

ಸೇವಾಕಾಂಕ್ಷಿ
**ಹು. ಜ. ರಾಮಯ್ಯಂಗಾರ್**

## ರಾಜಚರಿತ ವಿಶಾರದ, ರಾವ್ ಸಾಹೇಬ್, ರಾವ್ ಬಹದ್ದೂರ್

# ಸಿ. ಹಯವದನರಾವ್

ನವ ಮೈಸೂರಿನ ನಿರ್ಮಾಪಕ, ಆಲಸ್ಯವನ್ನರಿಯದ ಬಹುಮುಖ ಪ್ರತಿಭಾಶಾಲಿ, ಸಂಶೋಧಕ, ಇತಿಹಾಸಕಾರ, ಪತ್ರಕರ್ತ, ಸಾರ್ವಜನಿಕ ವಿಚಾರಗಳಲ್ಲಿ ಪ್ರಾಜ್ಞ, ಅರ್ಥಶಾಸ್ತ್ರಜ್ಞ, ಗ್ರಂಥಕರ್ತ, ಸಾಮಾಜಿಕ ಸೇವಾ ಕಾರ್ಯಕರ್ತ ಎಂದು ದೇಶ ವಿದೇಶಗಳಲ್ಲಿ ಹೆಸರು ಗಳಿಸಿದ ರಾಜಚರಿತ ವಿಶಾರದ, ರಾವ್ ಸಾಹೇಬ್, ರಾವ್ ಬಹದ್ದೂರ್ ಪ್ರಶಸ್ತಿಗಳನ್ನು ಪಡೆದ ಸಾರ್ವಜನಿಕ ಸೇವಕರಾಗಿ ತಮ್ಮ ಬದುಕನ್ನು ಸಾರ್ಥಕ ಪಡಿಸಿಕೊಂಡ, ಹಯವದನರಾಯರ ಜೀವನ ನಮಗೆಲ್ಲ ಸ್ಫೂರ್ತಿದಾಯಕವಾದುದು.

ಮೈಸೂರು ಸಂಸ್ಥಾನದ ಮಹಾರಾಜ ನಾಲ್ಮಡಿ ಕೃಷ್ಣರಾಜ ಒಡೆಯರಂಥ ದೂರದರ್ಶಿಯಾದ ವಿಲಕ್ಷಣ ರಾಜರ್ಷಿಯು ಆಳುತ್ತಿದ್ದಾಗ, ವಿಶ್ವೇಶ್ವರಯ್ಯ, ಮಿರ್ಜಾರವರು ಮಂತ್ರಿಗಳಾಗಿದ್ದಾಗ, ಕೀರ್ತಿವೆತ್ತ ಪರಿಣತರಲ್ಲಿ, ಹಯವದನ ರಾಯರು ಒಬ್ಬರು. ನಿರ್ಮತ್ಸರವಾದ ಗುಣಗ್ರಹಣ ಮನೋಧರ್ಮವನ್ನು ಹೊಂದಿದ್ದ ರಾಜ - ಮಂತ್ರಿಗಳಿಬ್ಬರಿಂದಲೂ ರಾಯರಿಗೆ ವಿಪುಲವಾದ ಸ್ಫೂರ್ತಿ-ಉತ್ತೇಜನ ದೊರಕಿತು. ಅಧಿಕಾರದಲ್ಲಿಲ್ಲದಿದ್ದರೂ, ರಾಜ ಪರಿವಾರಕ್ಕೆ ಸೇರಿರದಿದ್ದರೂ, ರಾಜಕೀಯ ರಂಗಕ್ಕೆ ಇಳಿಯದಿದ್ದರೂ, ಹತ್ತಾರು ಸಂಸ್ಥೆಗಳ ಪ್ರಗತಿಯಲ್ಲಿ ಪಾತ್ರವಹಿಸಿ, ಕಳೆದ ತಲೆಮಾರಿನ ಜನ ಜೀವನದ ಹತ್ತಾರು ರಂಗಗಳಲ್ಲಿ ಸೇವೆ ಸಲ್ಲಿಸಿದ ರಾಯರು ಪುರಸ್ಕೃತರಾಗಿ ಕೃತಕೃತ್ಯತೆ ಪಡೆದರು.

ರಾಯರು ಮೈಸೂರಿನವರಲ್ಲ. ಮದರಾಸು ಪ್ರಾಂತದ ಕೊಯಮತ್ತೂರು ಕಡೆಯ ಮಾಧ್ವ ದೇಶಸ್ಥ ಬ್ರಾಹ್ಮಣ ಮನೆತನ ಇವರದ್ದು. ತಂದೆ ರಾಜಾರಾಯರು ಕಂದಾಯ ಇಲಾಖೆಯ ಅಧಿಕಾರಿಗಳಾಗಿದ್ದರು. ತಾಯಿ ಗೋಜಿಬಾಯಿ. ಇವರು ಜನಿಸಿದುದು ಕೃಷ್ಣಗಿರಿ ತಾಲ್ಲೂಕಿನ ಹೊಸೂರಿನಲ್ಲಿ 1865ರ ಜುಲೈ 10 ರಂದು, ಗೋಪಾಲರಾವ್, ಕೃಷ್ಣಮೂರ್ತಿ, ವೇದವ್ಯಾಸರಾವ್, ತ್ರಿವಿಕ್ರಮರಾವ್ ನಾಲ್ಕು ಜನ ಸೋದರರು,

ಸಾಲುಬಾಯಿ ಸೋದರಿ. 1899ರಲ್ಲಿ ಡಾ॥ ರಾಜಾರಾಮರಾಯರ ಪುತ್ರಿ ವಿಜಿಬಾಯಿಯವರನ್ನು ಮದುವೆಯಾದರು. ತಾಯಿ ಶೈಶವದಲ್ಲೇ ಮರಣ ಹೊಂದಿದುದರಿಂದ ತಂದೆಯೇ ಇವರನ್ನು ಬೆಳೆಸಿದರು. ತಂದೆಯ ಅಭಿಮಾನ, ಪ್ರೋತ್ಸಾಹಗಳ ಜೊತೆಗೆ ಅತ್ತಿಗೆಯ ಪ್ರೀತಿಯೂ ಸಿಕ್ಕಿತು. ಮುಂದೆ ತಂದೆ ಸತ್ತ ನಂತರ ಸೋದರರು ಹೆಚ್ಚು ಕಾಲ ಒದುಕಿರಲಿಲ್ಲವಾದುದರಿಂದ, ವರಮಾನ ಸರಿಯಾಗಿಲ್ಲದಿದ್ದರೂ, ಅವರ ಪತ್ನಿ-ಮಕ್ಕಳ ಪೋಷಣೆಯ ಜವಾಬ್ದಾರಿಯೂ ಇವರ ಮೇಲೆ ಬಿದ್ದಿತು.

ಇವರ ಬಾಲ್ಯ ವಿದ್ಯಾಭ್ಯಾಸ ಹೊಸೂರಿನಲ್ಲಿ ನಡೆಯಿತು. ಆಮೇಲೆ ಮದರಾಸಿನ ಹಿಂದೂ ಹೈಸ್ಕೂಲು ಮತ್ತು ಪ್ರೆಸಿಡೆನ್ಸಿ ಕ್ರಿಶ್ಚಿಯನ್ ಕಾಲೇಜು ಗಳಲ್ಲಿ ಪ್ರೌಢ ಮತ್ತು ಉನ್ನತ ಶಿಕ್ಷಣ ಪಡೆದು, ಮದರಾಸು ವಿಶ್ವವಿದ್ಯಾ ನಿಲಯದ ಬಿ.ಎ. 1897ರಲ್ಲಿ, ಬಿ.ಎಲ್. 1903ರಲ್ಲಿ, ಪದವಿಗಳನ್ನು ಗಳಿಸಿ ದರು.

ಜ್ಞಾನಾರ್ಜನೆಯೇ ಮುಖ್ಯ ಹಂಬಲವಾಗಿದ್ದ ರಾಯರು ಮದರಾಸಿನ ಕ್ರಿಶ್ಚಿಯನ್ ಕಾಲೇಜಿನ ಪುಸ್ತಕ ಭಂಡಾರದಲ್ಲಿದ್ದ ಪುಸ್ತಕಗಳನ್ನೆಲ್ಲಾ ಓದಿ ಮುಗಿಸಿದ್ದರಂತೆ.

ಇವರಿಗೆ ಬಾಲ್ಯದಿಂದಲೂ ಪತ್ರಿಕಾ ವೃತ್ತಿಯೆಂದರೆ ಬಲು ಅಭಿಮಾನ. ತಮ್ಮ ವೆಚ್ಚಕ್ಕೆ ಬೇಕಾದ ಹಣವನ್ನು ತಾವೇ ಸಂಪಾದಿಸಬೇಕೆಂಬ ಆಸೆ ಇದ್ದಿತು. ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗಲೇ ಕೆಲವು ದಿನ ಮತ್ತು ವಾರಪತ್ರಿಕೆ ಗಳಿಗೆ ವಿಚಾರ ಪ್ರಚೋದಕ ಲೇಖನ, ಸಣ್ಣ ಕಥೆಗಳನ್ನು ಬರೆದು ಕಳುಹಿಸು ತ್ತಿದ್ದರು. ಇವರ ಲೇಖನ ಸಾಮರ್ಥ್ಯವನ್ನು ಎಲ್ಲರೂ ಮೆಚ್ಚಿಕೊಂಡಿದ್ದರು. ಕಾಲೇಜಿನಲ್ಲಿದ್ದಾಗಲೇ, ಹಿಂದೂ, ಇಂಡಿಯನ್ ರೆವ್ಯೂ, ಮದ್ರಾಸ್ ಟೈಮ್ಸ್, ಕ್ರಿಶ್ಚಿಯನ್ ಕಾಲೇಜು ಪತ್ರಿಕೆ ಇವುಗಳಲ್ಲಿ ಇವರ ಲೇಖನಗಳು ಪ್ರಕಟವಾಗು ತ್ತಿದ್ದುವು. ಪಾಠ ಪ್ರವಚನಗಳ ಜೊತೆಗೆ ಮನೆಕೆಲಸವನ್ನೂ ಮಾಡುತ್ತಿದ್ದರು.

ಇವರು ಮೊದಲು ವಕೀಲ ವೃತ್ತಿಗೆ ಕೈಹಾಕಿದಾಗ ಫಲಪ್ರದವಾಗಲಿಲ್ಲ. ಸ್ವಲ್ಪ ಕಾಲ ಮದರಾಸು ಸರ್ಕಾರದ ಪ್ರಾಚೀನ ವಿವಿಧ ವಸ್ತುಪ್ರದರ್ಶನಾಲಯ ದಲ್ಲಿ ವ್ಯವಸ್ಥಾಪಕರಾಗಿ ಕೆಲಸ ಮಾಡಿದರು. ದಕ್ಷಿಣ ಭಾರತದ ಜಾತಿ-ಬುಡಕಟ್ಟುಗಳು ಎಂಬ ವಿಚಾರವಾಗಿ ಬೃಹದ್ಗ್ರಂಥವೊಂದನ್ನು ರಚಿಸಲು

ಎಡ್ಗರ್ ಥರ್ಸ್ಟನ್ ಎಂಬುವನಿಗೆ ಇವರು ನೆರವಾಗಿದ್ದರು. ಮದರಾಸು ಸರ್ಕಾರದ ಪತ್ರಿಕೆಯ (ಗೆಝೆಟಿಯರ್) ಸಂಪುಟಗಳ ಪರಿಷ್ಕರಣೆಯಲ್ಲಿ ಫ್ರಾನ್ಸಿಸ್, ಹೆಮಿಂಗ್ವೇ ಎಂಬ ಇಬ್ಬರು ಅಧಿಕಾರಿಗಳಿಗೆ ನೆರವಾಗಿದ್ದರು. ದಕ್ಷಿಣ ಭಾರತದ ಜಾತಿಮತ ಸಮೀಕ್ಷಣ ಆಯೋಗದಲ್ಲಿ ಸೇರಿ ಕೆಲಸ ಮಾಡಿದ್ದರು. ಮುದ್ರಣ ಉದ್ಯಮ ಕಲೆಗಳಲ್ಲಿ ಅನುಭವಿಗಳಾಗಿದ್ದ ರಾಯರು ಮದರಾಸಿನಲ್ಲಿ ಪಿಳ್ಳರ್ ಕಂಪೆನಿ ಎಂಬ ಮುದ್ರಣ ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸಲು ಸಹಾಯ ಮಾಡಿದರು.

ವಿಶ್ವಕೋಶವೇ ಹರಡಿದ ಮೆದುಳನ್ನು ಹೊಂದಿದ್ದು, ಲೀಲಾಜಾಲವಾಗಿ ಶೈಕ್ಷಣಿಕ, ಆರ್ಥಿಕ ಸಮಸ್ಯೆಗಳ ಮೇಲೆ ಬರೆಯುತ್ತಿದ್ದು. ಉತ್ತಮ, ಪ್ರಸಿದ್ಧ ಲೇಖಕ, ಪತ್ರಿಕೋದ್ಯಮಿ ಎನಿಸಿಕೊಂಡ ಇವರನ್ನು **ಮದ್ರಾಸ್ ಮೇಲ್** (ಮದರಾಸ್ ಟೈಮ್ಸ್ ಪತ್ರಿಕೆ ಇದರೊಂದಿಗೆ ವಿಲೀನವಾಗಿತ್ತು) ಪತ್ರಿಕೆಯ ಸಂಪಾದಕರಾಗಿ ನೇಮಿಸಿಕೊಳ್ಳಲಾಯಿತು. ಈ ಮಧ್ಯೆ ಹಿಂದೂ ಇಂಗ್ಲೀಷ್ ದಿನ ಪತ್ರಿಕೆಯ ಮುಖ್ಯಸ್ಥ ಕಸ್ತೂರಿ ರಂಗಯ್ಯಂಗಾರ್ಯರಿಂದ ಸಂಪಾದಕನಾಗಲು ಬಂದ ಆಹ್ವಾನವನ್ನು ರಾಯರು ಒಪ್ಪಿಕೊಳ್ಳಲಿಲ್ಲ. ಆದರೆ ಅಲಹಾಬಾದಿನಿಂದ ಹೊರಡುತ್ತಿದ್ದ **ಲೀಡರ್** ಪತ್ರಿಕೆಯ ಹೊಣೆಗಾರಿಕೆಯನ್ನು ವಹಿಸಿಕೊಂಡು ಸರಿಯಾಗಿ ನಿರ್ವಹಿಸಿ ಯಶಸ್ಸು ಪಡೆದರು. ಹಾಗೂ ಮಹಾ ಮೇಧಾವಿ, ಅತ್ಯಂತ ಶ್ರೇಷ್ಠ ದರ್ಜೆಯ ಪತ್ರಿಕೋದ್ಯೋಗಿ ಎಂಬ ಕೀರ್ತಿಗೆ ಪಾತ್ರರಾದರು.

ನಾಲ್ಮಡಿ ಕೃಷ್ಣರಾಜ ಒಡೆಯರು ಮೈಸೂರು ಸಂಸ್ಥಾನದಲ್ಲಿ ಅಭಿವೃದ್ಧಿ ಕಾರ್ಯಗಳಿಗೆ ಪ್ರೋತ್ಸಾಹ ನೀಡುತ್ತಿದ್ದರು. ರಾಯರ ಕೆಲಸವನ್ನು ಕೇಳಿ, ನೋಡಿ, ಆಕರ್ಷಿತರಾದ ಮೈಸೂರು ಸಂಸ್ಥಾನದ ದಿವಾನರಾಗಿದ್ದ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಇವರನ್ನು ಮೈಸೂರಿಗೆ ಆಹ್ವಾನಿಸಿದರು. ಮೈಸೂರಿನ ವ್ಯವಸಾಯ, ಕೈಗಾರಿಕೆ, ಶಿಕ್ಷಣಗಳನ್ನು ಅಭಿವೃದ್ಧಿಗೊಳಿಸುವ ಉದ್ದೇಶದಿಂದ ವ್ಯವಸ್ಥಿತಗೊಳಿಸಲ್ಪಟ್ಟಿದ್ದ "ಮೈಸೂರು ಆರ್ಥಿಕ ಸಮ್ಮೇಳನ"ವನ್ನು 1911ರಲ್ಲಿ ಮಹಾರಾಜ ನಾಲ್ಮಡಿ ಕೃಷ್ಣರಾಜ ಒಡೆಯರೇ ಉದ್ಘಾಟಿಸಿದ್ದರು. ಜನಸಾಮಾನ್ಯರಿಗೆ ತಿಳುವಳಿಕೆ ನೀಡಲು ಈ ಸಂಸ್ಥೆಯ ಅಂಗವಾಗಿ **"ಮೈಸೂರು ಆರ್ಥಿಕ ಪತ್ರಿಕೆ"** ಪ್ರಕಟವಾಗಬೇಕಾಗಿದ್ದಿತು. ಇದರ ಹೊರೆ,

ಸಂಪಾದಕರಾಗಿ ನೇಮಿಸಲ್ಪಟ್ಟ ರಾಯರ ಮೇಲೆ ಬಿದ್ದಿತು. ಈ ಪತ್ರಿಕೆಯು ಮೊದಲು ಸಂಸ್ಥೆಯ ಅಂಗವಾಗಿ 1915ರಲ್ಲಿ ಹೊರಬಿದ್ದು, ರಾಯರ ಸಂಪಾದಕತ್ವದಲ್ಲಿ ಸ್ವತಂತ್ರವಾಗಿ ರಾಯರು ಇರುವವರೆಗೂ ನಿಂತಿತು. ಈ ಪತ್ರಿಕೆಯ ಮುಖಾಂತರ ರಾಯರು ಬರೆಯುತ್ತಿದ್ದ ಪ್ರಬಂಧಗಳು ನಾಡಿನ ಸರ್ವತೋಮುಖವಾದ ಶ್ರೇಷ್ಠತೆಯನ್ನು ಗಳಿಸಲು ದಾರಿದೀಪಗಳಂತಿದ್ದುವು. 1939ರಲ್ಲಿ ಈ ಪತ್ರಿಕೆಯ ಬೆಳ್ಳಿಹಬ್ಬವು ವೈಭವದಿಂದ ಆಚರಿಸಲ್ಪಟ್ಟಿತು. ರಾಯರ ಪ್ರತಿಭೆ ಪ್ರಯತ್ನ, ವ್ಯವಹಾರ ಸಾಮರ್ಥ್ಯಗಳಿಂದ ಇದು ಭಾರತದ ಹೊರಗಡೆಯೂ ಹೆಸರು ಗಳಿಸಿತು. ಈ ಪತ್ರಿಕೆಗೆ ಭಾರತದ ಹಾಗೂ ಪಶ್ಚಿಮ ದೇಶಗಳ ಪ್ರಸಿದ್ಧ ವ್ಯಕ್ತಿಗಳು ಲೇಖನಗಳನ್ನು ಬರೆಯುತ್ತಿದ್ದರು. ಬ್ರಿಟನ್, ಯೂರೋಪಿನ ದೇಶಗಳು ಹಾಗೂ ಅಮೆರಿಕಗಳಲ್ಲೂ ಈ ಪತ್ರಿಕೆಯು ಹೆಸರು ಗಳಿಸಿದ್ದಿತು. (ರಾಯರ ಮರಣದ ನಂತರ ಅವರ ಮಗ ಹೆಚ್.ವಿ.ಆರ್. ಅತ್ರೆಯವರು ಆಜೀವ ಪರ್ಯಂತ **"ಮೈಸೂರಿನ ಆರ್ಥಿಕ ವಿಮರ್ಶೆ"**ಎಂಬ ಹೆಸರಿನಿಂದ 50ಕ್ಕೂ ಹೆಚ್ಚು ವರ್ಷಗಳ ಕಾಲ ಪತ್ರಿಕೆಯೊಂದು ಬದುಕಿರಲು ನೆರವಾದರು.)

ಈ ಆರ್ಥಿಕ ಪತ್ರಿಕೆಯು ಇಂಗ್ಲೀಷ್ ಭಾಷೆಯಲ್ಲಿ ಮುಂದುವರೆಯಿತು. ಆದರೂ ಅದರ ಕನ್ನಡ ರೂಪಾಂತರವು **ಅರ್ಥ ಸಾಧಕ ಪತ್ರಿಕೆ** ಎಂಬ ಹೆಸರಿನಿಂದ ಪ್ರಕಟಗೊಂಡು ಕೆಲಕಾಲ ವಾರ ಪತ್ರಿಕೆಯಾಗಿ ಹೊರಬಿದ್ದಿತು. 1939ರಲ್ಲಿ ಹುಟ್ಟಿದ 'ದೇಶ ಬಂಧು' ಕನ್ನಡ ದಿನ ಪತ್ರಿಕೆಗೂ ರಾಯರ ಪ್ರೋತ್ಸಾಹ, ಪ್ರೇರಣೆ, ಮಾರ್ಗದರ್ಶನಗಳು ಮುಖ್ಯ ಕಾರಣ.

ಅಲಹಾಬಾದಿನಿಂದ ಮೈಸೂರಿಗೆ ಬಂದ ರಾಯರ ಪ್ರತಿಭೆಯು ವಿಶ್ವೇಶ್ವರಯ್ಯನವರ ಸ್ಫೂರ್ತಿ - ಬೆಂಬಲಗಳಿಂದ ಉತ್ತೇಜನಗೊಂಡಿತು. ಹಾಗೂ ಕೃಷ್ಣರಾಜ ಒಡೆಯರ ವಾತ್ಸಲ್ಯದಿಂದ ಉದಾತ್ತವಾಯಿತು. ಆರ್ಥಿಕ ಮಂಡಲಿಗಳ ಸ್ಥಾಪನೆಯಾದ ನಂತರ, ಇದನ್ನು ಜನರು ಗ್ರಹಿಸಲು ಪೂರ್ವ ಭಾವಿಯಾಗಿ ಸಿದ್ಧವಾಗಬೇಕಾದ ಶಿಕ್ಷಣ ಪ್ರಸಾರ - ಪ್ರಕಾಶನದ ವ್ಯವಸ್ಥೆ ಮುಂತಾದ ವಿವರ, ರೂಪುರೇಷೆಗಳನ್ನು ಸ್ಫುಟೀಕರಿಸುವುದರಲ್ಲಿ ರಾಜ-ಮಂತ್ರಿ ಇಬ್ಬರೂ ರಾಯರ ನೆರವನ್ನು ಪೂರ್ಣವಾಗಿ ಪಡೆದುಕೊಂಡರು. ಆರ್ಥಿಕ

ಸಿದ್ಧಾಂತಗಳಲ್ಲಿ ರಾಯರು ಹಳೆಯದನ್ನು ಮರೆಯದೆ ಹೊಸತನ್ನು ಹೊರ ಸೂಸುತ್ತಿದ್ದರು.

ರಾಯರು ಮತ್ತು ವಿ. ಸುಬ್ರಹ್ಮಣ್ಯ ಅಯ್ಯರ್ ಇವರ ನೆರವಿನಿಂದ ವಿಶ್ವೇಶ್ವರಯ್ಯನವರು ಬೆಂಗಳೂರಿನಲ್ಲಿ ಬೆಂಗಳೂರು ಪ್ರೆಸ್ ಎಂಬ ಉತ್ತಮ ದರ್ಜೆಯ ಮುದ್ರಣಾಲಯವನ್ನು ಸಾರ್ವಜನಿಕರ ಬಂಡವಾಳದ ಸಹಾಯದಿಂದ ಸ್ಥಾಪಿಸಿ ಅದಕ್ಕೆ ರಾಯರನ್ನೇ ಮುಖ್ಯಾಧಿಕಾರಿಯಾಗಿ ನೇಮಿಸಿದರು. ಅವರ ಪ್ರಯತ್ನದಿಂದ ಅದು ಇಡೀ ಭಾರತದಲ್ಲೇ ಸುಭದ್ರ, ಉತ್ತಮ, ಯಶಸ್ವಿ ಆದ ಮುದ್ರಣಾಲಯವೆನಿಸಿತು.

ಉದ್ಯಮದಿಂದಲೇ ನಾಡಿನ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳಬೇಕೆಂಬ ನಿಷ್ಠೆ, ಛಲ ಇದ್ದ ವಿಶ್ವೇಶ್ವರಯ್ಯನವರು ಔದ್ಯಮಿಕ ಶಿಕ್ಷಣಾಲಯಗಳನ್ನು ಸ್ಥಾಪಿಸಲು ಆಶಿಸಿದರು. ಬೆಂಗಳೂರಿನ ಶ್ರೀ ಕೃಷ್ಣರಾಜೇಂದ್ರ ಬೆಳ್ಳಿ ಹಬ್ಬದ ತಾಂತ್ರಿಕ ಶಿಕ್ಷಣ ಸಂಸ್ಥೆಯ ಕಟ್ಟಡ ಕಟ್ಟಿಸಲು ರಾಯರು ಮನೆಮನೆ ತಿರುಗಿ ಧನ ಸಂಗ್ರಹ ಮಾಡಿಕೊಟ್ಟರು. ಉದ್ಯೋಗ, ವಾಣಿಜ್ಯಗಳಲ್ಲಿ ತೀರದ ಅಭಿಮಾನವಿದ್ದ ರಾಯರು ಈ ಸಂಸ್ಥೆಯ ಕಾರ್ಯದರ್ಶಿಯಾಗಿ 1930ರಿಂದ ದುಡಿದರು. ಮೈಸೂರು ವಾಣಿಜ್ಯ ಸಂಘ, ಮೈಸೂರು ಸಕ್ಕರೆ ಕಂಪೆನಿ, ಮೈಸೂರು ಕಾರ್ಖಾನೆಗಳೆಲ್ಲ ರೂಪುಗೊಂಡುದು ರಾಯರ ದುಡಿಮೆಯಿಂದಲೇ. ಬೆಂಗಳೂರಿನ ಆಮ್ಕೊ ಬ್ಯಾಟರೀಸ್ ಎಂಬ ಉದ್ಯಮ ಸಂಸ್ಥೆಯ ಸಂಸ್ಥಾಪಕ ನಿರ್ವಾಹಕರಾಗಿದ್ದು ಅದು ತನ್ನ ಕಾಲ ಮೇಲೆ ನಿಲ್ಲುವಂತೆ ಮಾಡಿದರು. ಅಖಿಲ ಮೈಸೂರು ಔದ್ಯಮಿಕ ಸಂಸ್ಥೆಗಳ ಸಮಿತಿಗೆ 1930ರಲ್ಲಿ ಕಾರ್ಯದರ್ಶಿಯಾಗಿ ನೇಮಕಗೊಂಡರು.

ಕೈಗಾರಿಕೆ ವಾಣಿಜ್ಯ ಮಂಡಲಿಗಳ ಸಕ್ರಿಯ ಸದಸ್ಯರಾಗಿದ್ದ ಇವರಿಗೆ ಜನೋಪಕಾರಿ ಕಾರ್ಯಗಳು ತುಂಬಾ ಪ್ರಿಯವಾಗಿದ್ದುವು. ಜನಜೀವನದಲ್ಲಿ, ಸಾಮಾಜಿಕ ರಂಗದಲ್ಲಿ ಇವರಷ್ಟು ಅವಿರತವಾಗಿ ದುಡಿದವರು ಬಹುವಿರಳ. ಹೊಸದಾಗಿ ಪ್ರಾರಂಭವಾದ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಗೆ ಬಹುಕಾಲ ಕಾರ್ಯದರ್ಶಿ, ಕೋಶಾಧಿಕಾರಿ ಆಗಿದ್ದರು. ಪ್ರಥಮ ವಿಶ್ವಯುದ್ಧಕಾಲದಲ್ಲಿ ಸರ್ಕಾರ ಏರ್ಪಡಿಸಿದ ಪ್ರಚಾರ ಸಮಿತಿಯಲ್ಲಿ ಕಾರ್ಯದರ್ಶಿ, ಕೋಶಾಧ್ಯಕ್ಷ ಆಗಿ ಕೆಲಸ ಮಾಡಿದರು. ಬೆಂಗಳೂರು ನಗರಸಭೆಯ ಚುನಾಯಿತ ಸದಸ್ಯ

ರಾಗಿದ್ದ ಇವರು ಗವೀಪುರಂ ಗುಟ್ಟಹಳ್ಳಿ ಗೃಹ ನಿರ್ಮಾಣ ಸಹಕಾರ ಸಂಸ್ಥೆಯನ್ನು ಸ್ಥಾಪಿಸಿ ಅದರ ಮೊದಲ ಅಧ್ಯಕ್ಷರಾಗಿ ಅದರ ವಿಸ್ತರಣೆಗಳ ನಿರ್ಮಾಣದಲ್ಲಿ ಆಸಕ್ತಿ ವಹಿಸಿ, ಬಡವರ, ಕೆಳಮಧ್ಯಮ ವರ್ಗದವರ ವಸತಿ ಸಮಸ್ಯೆಯನ್ನು ಬಗೆಹರಿಸಲು ಶ್ರಮಿಸಿದರು. ಇದು ಮೈಸೂರು ರಾಜ್ಯದಲ್ಲಿ ಮೊದಲನೆಯ ಸಹಕಾರ ಸಂಘ; ಗೃಹ ನಿರ್ಮಾಣ ಸಹಕಾರ ಸಂಸ್ಥೆಗಳ ಅಗತ್ಯವನ್ನು ಕಂಡುಕೊಂಡವರಲ್ಲಿ ರಾಯರೇ ಮೊದಲಿಗರು. ಜೊತೆಗೆ ಸಹಕಾರೀ ಚಳುವಳಿಯನ್ನು ಹರಡುವುದರಲ್ಲೂ ಬಹಳ ಆಸಕ್ತಿ ವಹಿಸಿದ್ದರು. ಸಹಕಾರೀ ಅಪೆಕ್ಸ್ ಬ್ಯಾಂಕ್, ಮೈಸೂರು ಬ್ಯಾಂಕುಗಳ ನಿರ್ವಾಹಕರಾಗಿದ್ದು ಅನೇಕ ವರ್ಷ ದುಡಿದರು. ಬ್ರಿಟಿಷರ ವಶದಲ್ಲಿದ್ದ ದಂಡು ಪ್ರದೇಶವು ಮೈಸೂರು ಸಂಸ್ಥಾನಕ್ಕೆ ಸೇರಬೇಕೆಂಬ ಮಹಾ ಚಳುವಳಿಯಲ್ಲಿ ರಾಯರ ಸಕ್ರಿಯ ಪಾತ್ರ ಅಭಿನಂದನೀಯವಾದುದು. 1934ರಿಂದ 1940ರ ವರೆಗೆ ಮೈಸೂರು ನ್ಯಾಯವಿಧಾಯಕ ಸಭೆಯ ಸದಸ್ಯರಾಗಿದ್ದರು. ಬೆಂಗಳೂರು ಶೇಷಾದ್ರಿ ಸ್ಮಾರಕ ಭವನದಲ್ಲಿರುವ ಸಾರ್ವಜನಿಕ ಪುಸ್ತಕ ಭಂಡಾರದ ಮೇಲ್ವಿಚಾರಕ ಸಮಿತಿಯ ಸದಸ್ಯರಾಗಿದ್ದರು. ರಾಜ್ಯ ಕಾಗದ ಮತ್ತು ಲೇಖನ ಸಾಮಗ್ರಿಗಳ ವರ್ತಕರ ಸಂಘದ ಸ್ಥಾಪನೆಗೆ ಕಾರಣರಾಗಿದ್ದರು. ರಾಜ್ಯ ಶೀಘ್ರಲಿಪಿಕಾರರ ಸಂಘವನ್ನು ಸ್ಥಾಪಿಸಿದರು. ಮೈಸೂರು ಪತ್ರಿಕೋದ್ಯಮಿಗಳ ಸಂಸ್ಥೆಯು 1932ರಲ್ಲಿ ಮೈತಳೆದು ಮುನ್ನಡೆಯಲು, ಪತ್ರಿಕೆಗಳು ಅಭಿವೃದ್ಧಿ ಪಡೆದು ವರ್ಚಸ್ಸು ಗಳಿಸಲು, ಇವರ ನೆರವು ಬಹುಮಟ್ಟಿಗೆ ಕಾರಣವಾಯಿತು. ಅಖಿಲ ಮೈಸೂರು ತಾಂತ್ರಿಕ ಶಿಕ್ಷಣ ಸಂಸ್ಥೆಗಳ ಕಾರ್ಯದರ್ಶಿ ಆಗಿದ್ದರು. ಮೈಸೂರು ವಿಶ್ವವಿದ್ಯಾಲಯದ ಸೆನೆಟ್ ಮತ್ತು ಅಕಾಡೆಮಿಕ್ ಕೌನ್ಸಿಲ್‌ಗಳ ಸದಸ್ಯರಾಗಿ ಹೊಗಳಿಸಿಕೊಳ್ಳುವಂತಹ ಕೆಲಸ ಮಾಡಿದರು. ಎಲ್ಲ ಮಟ್ಟಗಳಲ್ಲಿಯೂ ಕನ್ನಡವು ಶಿಕ್ಷಣದ ಭಾಷೆಯಾಗಬೇಕು, ಸ್ತ್ರೀಯರಿಗೆ ಉಚ್ಚ ಶಿಕ್ಷಣ ಸಿಗಬೇಕು, ವಿದ್ಯಾರ್ಥಿಗಳಿಗೆ ಸೈನಿಕ ಶಿಕ್ಷಣ ನೀಡಬೇಕು ಎಂಬೀ ದೂರ ದೃಷ್ಟಿಯ ಪ್ರಜಾಹಿತಗಳನ್ನು ಎತ್ತಿಹಿಡಿಯುತ್ತಿದ್ದರು.

ಇತಿಹಾಸ ಎಂದರೂ ರಾಯರಿಗೆ ಅತಿಶಯ ಅಭಿಮಾನವಿದ್ದಿತು. 1924ರಲ್ಲಿ ಮದರಾಸಿನಲ್ಲಿ ನೆರೆದ ಭಾರತೀಯ ಐತಿಹಾಸಿಕ ದಾಖಲೆ ಪತ್ರಗಳ ಆಯೋಗದಲ್ಲಿ ಸದಸ್ಯರಾಗಿ ಭಾಗವಹಿಸಿದ್ದರು. ಆಯೋಗದ ಪತ್ರಿಕೆಗಳಲ್ಲಿ

ಇವರ ಸಂಶೋಧನ ಕೃತಿಗಳು ಪ್ರಕಟಿಸಲ್ಪಟ್ಟುವು. ಜನರ ನಡೆನುಡಿ, ಮತ ಭೇದಗಳು ಮುಂತಾದುವನ್ನು ಆದ್ಯಂತವಾಗಿ ತಿಳಿದುಕೊಂಡಿದ್ದ ಇವರ ಸಹಾಯ-ಸಹಕಾರಗಳನ್ನು, ಆ ಬಗ್ಗೆ ಗ್ರಂಥ ರಚಿಸುವಾಗ ಥರ್‌ಸ್ಟನ್ ಎಂಬ ಆಂಗ್ಲ ವಿದ್ವಾಂಸನು ಪಡೆದಿದ್ದನು. ಆ ಗ್ರಂಥಗಳು ಸಮಾಜಶಾಸ್ತ್ರದ ಪಠ್ಯ ಪುಸ್ತಕ ಎನಿಸಿಕೊಂಡಿವೆ.

ಸಾರ್ವಜನಿಕ ಚಟುವಟಿಕೆಗಳಲ್ಲಿ ತೊಡಗಿದ್ದೂ ಮೂರು ಅಮೋಘ ಕೃತಿಗಳನ್ನು ರಚಿಸಿದ್ದಾರೆ.

(1) 40 ವರ್ಷಗಳ ಕಾಲ ದುಡಿದು ಮೈಸೂರುದೇಶದ ಅರಸರ ನಾಲ್ಕುನೂರು ವರ್ಷಗಳ (1399ರಿಂದ 1799) ಇತಿಹಾಸದ 2,800 ಪುಟಗಳ ಗ್ರಂಥವನ್ನು ಮೂರು ಸಂಪುಟಗಳಲ್ಲಿ ಬರೆದು ಪ್ರಕಟಿಸಿದರು. ಅದು ಆ ಕಾಲದಲ್ಲಿ ಪ್ರಪಂಚಕ್ಕೆ ಹೊಸದು ಎನಿಸಿ ಅಪರೂಪದ ಮಾಹಿತಿ ಇದ್ದು ಇಂದಿಗೂ ಪ್ರಮಾಣಭೂತವಾದ, ಅತ್ಯಮೂಲ್ಯವಾದ ಐತಿಹಾಸಿಕ ಗ್ರಂಥ ವೆಂದು ಪರಿಗಣಿಸಲ್ಪಟ್ಟಿದೆ. ಮೈಸೂರನ್ನು ಕುರಿತ ಈ ಗ್ರಂಥಕ್ಕೆ ಸರಿಸಾಟಿ ಯಾದ ಗ್ರಂಥ ಮತ್ತೊಂದಿಲ್ಲ.

(2) 1876ರ ವೇಳೆಗೆ ರೈಸ್ ಎಂಬಾತನು ಸಿದ್ಧಪಡಿಸಿದ್ದ ಮೈಸೂರನ್ನು ಕುರಿತ ಸಮಾಚಾರಗಳ ಕಣಜ, ಸರ್ವ ವಿಷಯ ಸಂಗ್ರಹ ಎನಿಸಿದ್ದ, ಸಮಾಚಾರ ಪತ್ರಿಕೆ **(ಗೆಝೆಟಿಯರ್)** ಗ್ರಂಥವನ್ನು ಸಂಸ್ಕರಿಸಿ ಮತ್ತೆ ಪ್ರಕಟಿಸಲು 1901ರಲ್ಲಿ ಮೈಸೂರು ಸರ್ಕಾರ ನಿರ್ಧರಿಸಿದ್ದಿತು. ರಾಯರ ಪ್ರತಿಭೆ, ಮೇಧಾಶಕ್ತಿಗಳನ್ನು ಅನೇಕ ರೀತಿಯಲ್ಲಿ ಉಪಯೋಗಿಸಿಕೊಂಡ ದಿವಾನ್ ಮಿರ್ಜಾ ಇಸ್ಮಾಯಿಲ್ ಈ ಹೊಣೆಯನ್ನು 1924ರಲ್ಲಿ ರಾಯರ ಹೆಗಲಿಗೆ ಕಟ್ಟಿದರು. ಇದರ ಫಲವಾಗಿ ಏಳು ಸಂಪುಟಗಳಷ್ಟು ವಿಸ್ತಾರವಾದ, ಅಧಿಕಾರ ಯುತವಾದ, ಪ್ರಮಾಣಭೂತವಾದ ವಿಖ್ಯಾತ ಗ್ರಂಥಗಳು ಬೆಳಕಿಗೆ ಬಂದುವು. ಮೈಸೂರಿನ ಇತಿಹಾಸ, ಭೌಗೋಳಿಕ ವಿವರಗಳು, ಶಿಲ್ಪಸಂಪತ್ತು, ಆಧ್ಯಾತ್ಮ ವಿಚಾರ, ಉದ್ಯಮ ವಿವರ, ಸ್ಥಳ ಮಹಾತ್ಮೆ ಮುಂತಾದ ವೈವಿಧ್ಯತೆ ವಿವರಗಳ ಸಂಗ್ರಹ ವೈಪುಲ್ಯ ಅದ್ಭುತವಾದುದು. ರಾಜ್ಯದ ಇತಿಹಾಸದ ಮೇಲೆ ಹೊಸ ಬೆಳಕು ನೀಡಿದ ಈ ಗ್ರಂಥಕ್ಕೆ ಸರಿತೂಗಬಲ್ಲ ಗ್ರಂಥ ಇದುವರೆಗೂ ಬಂದಿಲ್ಲ. ಈ ಕೃತಿಯ ರಚನೆಯಿಂದ ರಾಯರ ಕೀರ್ತಿ ಅಜರಾಮರವಾಯಿತು.

ಗೆಝೆಟಿಯರ್ ಹಯವದನರಾಯ ಎಂಬ ಹೆಸರಿನಿಂದ ಅವರು ಜನಮನದಲ್ಲಿ ನೆಲೆಸಿದರು.

(3) 1400ರ ವೇಳೆಗೇ ಶ್ರೀಪತಿ ಪಂಡಿತಾಚಾರ್ಯರು ಬ್ರಹ್ಮ ಸೂತ್ರಗಳಿಗೆ ಶಕ್ತಿ ವಿಶಿಷ್ಟಾದ್ವೈತ ಪರವಾಗಿ ರಚಿಸಿದ್ದ **ಶ್ರೀಕರ ಭಾಷ್ಯ**ವನ್ನು, ಸುದೀರ್ಘವಾದ ಪ್ರಾಸ್ತಾವಿಕ ಲೇಖನದೊಂದಿಗೆ ರಾಯರು ಇಂಗ್ಲೀಷಿನಲ್ಲಿ ಪ್ರಕಟಿಸಿದರು. ಆರ್ಥಿಕ, ಸಾಮಾಜಿಕ, ರಾಜಕಾರಣ ಕಾರ್ಯಗಳಲ್ಲಿ ಬಿಡು ವಿಲ್ಲದೆ ಮುಳುಗಿದ್ದ ಇವರು 886 ಪುಟಗಳ ಈ ಪಾಂಡಿತ್ಯಪೂರ್ಣ ದಾರ್ಶನಿಕ ಗ್ರಂಥವೊಂದನ್ನು ಪ್ರಕಾಶನಗೊಳಿಸಿದುದು ಅವರ ಪ್ರತಿಭೆಗೆ ಸಾಕ್ಷಿಯಾಗಿದೆ. ವೈಷ್ಣವರಾದರೂ ವೀರಶೈವ ಧರ್ಮದರ್ಶನಗಳ ಬಗ್ಗೆ ಬರೆದು ಜ್ಞಾನಕ್ಕೆ ಪಕ್ಷಪಾತ ಕೂಡದು ಎಂಬ ತಮ್ಮ ಉದಾರ ಮನೋಭಾವವನ್ನು ತೋರಿಸಿ ಕೊಟ್ಟಿದ್ದಾರೆ. ಇವೇ ಅಲ್ಲದೆ ಮೈಸೂರಿನ ಜಗನ್ಮೋಹನ ಅರಮನೆಯಲ್ಲಿರುವ ಐತಿಹಾಸಿಕ ಚಿತ್ರಗಳು, ಮೈಸೂರಿನಲ್ಲಿ ದಸರ, ಭಾರತೀಯ ಜೀವನಚರಿತ್ರೆಯ ನಿಘಂಟು, ಭಾರತದಲ್ಲಿ ಜಾತಿ ಪದ್ಧತಿ, ಸರ್ ಮಿರ್ಜಾ ಇಸ್ಮಾಯಿಲ್‌ರವರ ಭಾಷಣಗಳು, ಸರ್ ಆಲ್ಬಿಯನ್ ಬ್ಯಾನರ್ಜಿಯವರ ಭಾಷಣಗಳು ಎಂಬ ಕೃತಿ ಗಳನ್ನೂ ರಚಿಸಿದ್ದಾರೆ.

ಮೈಸೂರಿನಲ್ಲಿ ಮಾತ್ರವಲ್ಲದೆ ಭಾರತದಾದ್ಯಂತ ಹಾಗೂ ವಿದೇಶಗಳಲ್ಲೂ ಕೀರ್ತಿ ಗಳಿಸಿದ್ದಾರೆ. ಸುಪ್ರಸಿದ್ಧ ಅರ್ಥಶಾಸ್ತ್ರಜ್ಞ, ಶ್ರೇಷ್ಠ ವಿಚಾರಶೀಲ, ಪ್ರಮುಖ ಪತ್ರಿಕೋದ್ಯಮಿ ಎಂದು ಬ್ರಿಟನ್, ಅಮೆರಿಕಗಳಲ್ಲಿ ಅವರನ್ನು ಗೌರವಿಸಲಾಯಿತು.

ಜೀವಿಸಿದ್ದಾಗಲೇ ಸಾಕಷ್ಟು ಪುರಸ್ಕಾರಗಳನ್ನು ಗಳಿಸಿದ ಭಾಗ್ಯಶಾಲಿ ರಾಯರು. ಬ್ರಿಟನ್ನಿನ ಚಕ್ರವರ್ತಿ ಐದನೆಯ ಜಾರ್ಜ್ ಇದ್ದಾಗ ದೆಹಲಿಯಲ್ಲಿ ನಡೆದ ವಿಶೇಷ ಪಟ್ಟಾಭಿಷೇಕದ ದರ್ಬಾರಿಗೆ ಕರೆಸಿಕೊಂಡು ಬ್ರಿಟನ್ನಿನ ಸರ್ಕಾರ ಇವರನ್ನು ಸನ್ಮಾನಿಸಿತು. ವೈಸರಾಯಿಯಿಂದ ರಾವ್ ಸಾಹೇಬ್ ಉಪಾಧಿ ಸಿಕ್ಕಿತು. ಬ್ರಿಟಿಷ್ ಅರಸರ ಸಿಂಹಾಸನಾರೋಹಣ ಕಾಲದಲ್ಲಿ ಸುವರ್ಣ ಪದಕ ವನ್ನು ನೀಡಲಾಯಿತು. ವೈಸರಾಯಿ ಲಿನ್‌ಲಿತ್ ಗೋರವರ ಕಾಲದಲ್ಲಿ ರಾವ್ ಬಹದ್ದೂರ್ ಪ್ರಶಸ್ತಿ ದೊರಕಿತು. ಇವರ ವಿದ್ವತ್ತಿಗೆ ಮೆಚ್ಚಿದ ಕೃಷ್ಣರಾಜ ಒಡೆಯರ್ ಇವರಿಗೆ ರಾಜಚರಿತ ವಿಶಾರದ ಎಂಬ ಬಿರುದನ್ನು

ದಯಪಾಲಿಸಿದರು. ದೇಶದ ಹೊರಗೂ ಇವರ ಪಾಂಡಿತ್ಯವನ್ನು ಮೆಚ್ಚಿಕೊಂಡು ಲಂಡನ್‌ನಲ್ಲಿರುವ ಬ್ರಿಟನ್ನಿನ ಮಾನವ ಜಾತಿ ಶಾಸ್ತ್ರ ಸಂಸ್ಥೆ ಹಾಗೂ ರಾಜಾರ್ಹ ಅರ್ಥಶಾಸ್ತ್ರ ಸಂಘ ಎಂಬ ಪ್ರಖ್ಯಾತ ಪಂಡಿತ ಸಂಸ್ಥೆಗಳು ಇವರನ್ನು ಗೌರವ ಸದಸ್ಯರನ್ನಾಗಿ ಸ್ವೀಕರಿಸಿದ್ದುದು ಗೌರವದ ಹಾಗೂ ಹೆಮ್ಮೆಯ ವಿಷಯ.

ರಾಯರು ಆಚಾರಶೀಲ, ನಿಷ್ಠಾವಂತ ಮಾಧ್ವ ಬ್ರಾಹ್ಮಣರಾಗಿದ್ದರೂ ಹಿಂದು, ಇಸ್ಲಾಂ, ಪಾರ್ಸಿ, ಕ್ರೈಸ್ತ ಧರ್ಮಾನುಯಾಯಿಗಳ ಪ್ರಮುಖ ನಾಯಕರಿಗೆ ಮಿತ್ರ, ದಾರ್ಶನಿಕ, ಮಾರ್ಗದರ್ಶಕ ಆಗಿದ್ದರು. ಅಸಾಧಾರಣ ವ್ಯಕ್ತಿತ್ವ ಹೊಂದಿದ್ದ ರಾಯರು ಪಾಂಡಿತ್ಯ, ಕಾರ್ಯದಕ್ಷತೆಗಳಲ್ಲಿ ನಿಸ್ಸೀಮರಾಗಿದ್ದರೂ, ಸಂಪ್ರದಾಯಶೀಲರಾಗಿದ್ದರೂ, ಆಧುನಿಕತೆಯನ್ನೂ ಮೈಗೂಡಿಸಿಕೊಂಡಿದ್ದರು. ಟೆನ್ನಿಸ್, ಕ್ರಿಕೆಟ್ ಆಟಗಳಲ್ಲಿ ಅನುರಕ್ತರಾಗಿದ್ದರು. ಕುದುರೆ ಸವಾರಿಯಲ್ಲಿ ನಿಪುಣರಾಗಿದ್ದರು. ಯಾವ ವಿಷಯವನ್ನು ಕುರಿತಾದರೂ ಪೂರ್ವ ಸಿದ್ಧತೆಯಿಲ್ಲದೆ ನಿರರ್ಗಳವಾಗಿ ಮಾತನಾಡುತ್ತ ಶ್ರೇಷ್ಠ ವಾಗ್ಮಿ ಎನಿಸಿದ್ದರು. ಇಂಗ್ಲೀಷಿನಲ್ಲಿ ಅವರು ಅಗಾಧ ಪಾಂಡಿತ್ಯ ಗಳಿಸಿದ್ದರು. ಅಲ್ಲದೆ ಲ್ಯಾಟಿನ್, ಫ್ರೆಂಚ್, ಜರ್ಮನ್, ಮುಂತಾದ ಪ್ರಮುಖ ಅಂತರ ರಾಷ್ಟ್ರೀಯ ಭಾಷೆಗಳ ಪರಿಚಯ ಅವರಿಗೆ ಇದ್ದಿತು. ಮರಾಠಿ ಮಾತೃಭಾಷೆಯಾಗಿದ್ದರೂ ತೆಲುಗು, ಕನ್ನಡ, ತಮಿಳು ಅವರಿಗೆ ಚೆನ್ನಾಗಿ ತಿಳಿದಿದ್ದಿತು. ಮೈಸೂರು, ಮದರಾಸು ವಿಶ್ವವಿದ್ಯಾಲಯದ ತೆಲುಗು ಭಾಷಾ ಪರೀಕ್ಷಕರಾಗಿದ್ದರು. ಸಂಸ್ಕೃತದಲ್ಲಿ ಸಾಕಷ್ಟು ಪರಿಶ್ರಮವಿದ್ದ ಇವರು ಮೈಸೂರಿನ ಸಂಸ್ಕೃತ ಅಕಾಡೆಮಿಯ ಹಾಗೂ ಬೆಂಗಳೂರಿನ ಸಂಸ್ಕೃತ ಕಾಲೇಜಿನ ಮೇಲ್ವಿಚಾರಕ ಸಮಿತಿಯ ಸದಸ್ಯರಾಗಿದ್ದರು.

ಶಾಖಾಹಾರಿಯಾಗಿ, ಯಾವ ದುಶ್ಚಟಗಳೂ ಇಲ್ಲದ, ಆಲಸ್ಯ ಸೋಮಾರಿತನಗಳನ್ನು ಅರಿಯದ, ಇವರು ಸತತವಾಗಿ ದುಡಿದು ನಾಡಿಗೆ ತಮ್ಮ ಪ್ರತಿಭೆಯ ಕಾಣಿಕೆ ಸಲ್ಲಿಸಿ ಮರೆಯಾದರು.

ಸರಳ ಜೀವನ, ಉನ್ನತ ಚಿಂತನ ತತ್ತ್ವದ ಪ್ರತೀಕವಾಗಿದ್ದ ಇವರು ಪತ್ರಿಕೋದ್ಯೋಗಿಗಳಿಗೆ, ಐತಿಹಾಸಿಕ ಸಂಶೋಧಕರಿಗೆ, ವಿದ್ವಾಂಸರಿಗೆ ಸ್ಫೂರ್ತಿಯ ಸೆಲೆಯಾಗಿದ್ದುದಲ್ಲದೆ, ಅಂತಹವರಿಗೆ ಸಹಾನುಭೂತಿ ತೋರಿಸಿ,

ಸಹಾಯ ಮಾಡಿ, ರಚನಾತ್ಮಕ ಸಲಹೆ ನೀಡುತ್ತಿದ್ದರು. ರಾಜ, ದಿವಾನ, ವೈಸರಾಯಿ ಅವರುಗಳನ್ನು ನೋಡುವಾಗಲೂ ತಮಗೆ ಪ್ರಿಯವಾಗಿದ್ದ ಖಾದಿ ಉಡುಪನ್ನೇ ಧರಿಸಿ, ಯಾವಾಗಲೂ ಮೈಸೂರು ಪೇಟ ಧರಿಸುತ್ತಿದ್ದು ಶಿಸ್ತು ಪಾಲಿಸುತ್ತಿದ್ದರು. ಬ್ರಿಟಿಷ್ ರೆಸಿಡೆಂಟರುಗಳು, ಮಂತ್ರಿ ಮಂಡಲದ ಸದಸ್ಯರು, ಆಡಳಿತಗಾರರು, ನ್ಯಾಯಾಧೀಶರು, ಸಂಪಾದಕರು, ಪ್ರಕಾಶಕರು, ಸಾರ್ವಜನಿಕ ಕಾರ್ಯಕರ್ತರು, ಪಂಡಿತ ಪಾಮರರು, ಶ್ರೀಸಾಮಾನ್ಯ - ಮಹೋನ್ನತ ಅಧಿಕಾರಿ - ಈ ಸರ್ವಜನರ ಅಪಾರ ಪ್ರೀತಿ-ವಿಶ್ವಾಸ-ಗೌರವ ಗಳಿಗೆ ಪಾತ್ರರಾಗಿದ್ದರು.

ವಿದ್ಯೆ - ವಿನಯಗಳ ಗಣಿಯಾಗಿದ್ದ ಅವರು ಒಬ್ಬ ವ್ಯಕ್ತಿಯಾಗಿರದೆ ಒಂದು ಮಹಾ ಸಂಸ್ಥೆಯಂತಿದ್ದು ಎಲ್ಲರಿಗೂ ಜ್ಞಾನೋಪದೇಶ ಮಾಡು ತ್ತಿದ್ದರು. ಆರ್ಥಿಕ ವಲಯಗಳಲ್ಲಿ ಅವರ ಅಭಿಪ್ರಾಯಕ್ಕೆ ಎಲ್ಲರೂ ತಲೆ ಬಾಗುತ್ತಿದ್ದರು. ಅವರ ವಿದ್ಯಾ ಪ್ರಾವೀಣ್ಯತೆಗೆ ತಕ್ಕಂತೆ ಅವರಿಗೆ ಆಡಂಬರ ಗಳಿರಲಿಲ್ಲ. ತಮ್ಮ ಬಳಿಗೆ ಬಂದವರೆಲ್ಲರನ್ನೂ ಮಕ್ಕಳಂತೆ ಆದರಿಸುತ್ತಿದ್ದರು. ತಮಗೆ ಅಪಾರವಾದ ಜ್ಞಾನವಿದೆ ಎಂಬುದನ್ನು ಯಾವಾಗಲೂ ತೋರಿಸಿ ಕೊಂಡವರಲ್ಲ. ಅವರು ಯಾವ ಕಾರ್ಯವನ್ನು ಕೈಗೆತ್ತಿಕೊಂಡರೂ ಅದಕ್ಕೆ ಒಂದು ಮೆರುಗು ಕೊಡುತ್ತಿದ್ದರು. ಅವರು ನಡೆಯುವ ವಿಶ್ವಕೋಶ ಎನಿಸಿದ್ದರು.

ನಿರಂತರ ದುಡಿಮೆ, ಅನುಪಮ ಕಾರ್ಯಸಾಧನೆ, ಅಪಾರ ಕೀರ್ತಿ ಇವುಗಳ ತ್ರಿವೇಣೀ ಸಂಗಮಕ್ಕೆ ಹೆಸರಾದ ರಾಯರ, ಸುಮಾರು 80 ವರ್ಷಗಳ ಕಾಲ ಉಜ್ವಲ, ಸಾರ್ಥಕ ಬದುಕನ್ನು ಬಾಳಿದ ಈ ಮಹಾಮೇಧಾವಿಯು, ಸ್ಮರಣೆ ಯುವ ಜನರಿಗೆ ಸ್ಫೂರ್ತಿದಾಯಕವಾದುದು ಹಾಗೂ ಕನ್ನಡಿಗರೆಲ್ಲರೂ ಹೆಮ್ಮೆ ಪಡುವಂತಹುದು.

— ● —

# ಅನುಬಂಧ

## ಪ್ರಸಿದ್ಧ ಪತ್ರಿಕೆ

ಶ್ರೀಮತ್ಸಮಸ್ತ ಭೂಮಂಡಲ ಮಂಡನಾಯಮಾನ ನಿಖಿಲ ದೇಶಾವತಂಸ ಕರ್ಣಾಟಕ ಜನಪದ ಸಂಪದಧಿಷ್ಠಾನಭೂತ ಶ್ರೀಮನ್ಮಹೀಶೂರ ಮಹಾ ಸಂಸ್ಥಾನ ಮಧ್ಯದೇದೀಪ್ಯಮಾನ ನಿಖಿಲ ಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ರಾಜ ಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರ ನರಪತಿ ಬಿರುದಂ ತೆಂಬರ ಗಂಡ ಲೋಕೈಕವೀರ ಯದುಕುಲಪಯಃ ಪಾರಾವಾರ ಕಲಾನಿಧಿ ಶಂಖಚಕ್ರಾಂಕುಶ ಕುಠಾರಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀ ವರಾಹ ಹನುಮದ್ಗರುಡ ಕಂಠೀರ ವಾದ್ಯನೇಕ ಬಿರುದಾಂಕಿತರಾದ ಕರ್ಣಾಟಕ ಸಿಂಹಾಸನಾಧೀಶ್ವರ

**ಶ್ರೀಮತ್ಕೃಷ್ಣ ರಾಜೇಂದ್ರ ಒಡೆಯರ್ ಬಹದ್ದೂರ್**

ಜಿ.ಸಿ.ಎಸ್.ಐ., ಜಿ.ಬಿ.ಇ.ಯವರು

ಶಾಲೀವಾಹನ ಶಕ ೧೮೫೫ (ಇಸವಿ 1933) ಆಂಗೀರಸ ನಾಮ ಸಂವತ್ಸರದ ಆಶ್ವಯುಜ ಶುದ್ಧ ಏಕಾದಶಿ ಸೋಮವಾರದಲ್ಲು ನವರಾತ್ರಿ ಮಹೋತ್ಸವ ಪ್ರಯುಕ್ತವಾದ ದರ್ಬಾರಿನಲ್ಲಿ ನಮ್ಮ ಅನುಗ್ರಹಕ್ಕೆ ಪಾತ್ರರಾದ

**ಶ್ರೀಮಾನ್ ಕಾಂಜೀವರಂ ಹಯವದನರಾಯರವರಿಗೆ**

**ರಾಜಚರಿತ ವಿಶಾರದ**

ಎಂಬ ಬಿರುದನ್ನು ತಕ್ಕ ಮರ್ಯಾದೆಗಳೊಡನೆ ದಯಪಾಲಿಸಿರುತ್ತೇನೆ.

—ಶ್ರೀಕೃಷ್ಣ

## Viceregal Lodge, Simla

By Command

of

His Majesty the King Emperor

The accompanying *Medal* is forwarded

to

Rajacharita Visharada, Rao Sahib

**Mr. C. Hayavadana Rao,** B.A., B.L.

to be worn in commemoration of

Their Majesties' Silver Jubilee

6th May 1935

## Viceregal Lodge, Simla

By Command

of

His Majesty the King Emperor

The accompanying *Medal* is forwarded

to

Rajacharita Visharada, Rao Sahib

**Mr. C. Hayavadana Rao,** B A., B L.

to be worn in commemoration of

Their Majesties' Coronation

12th May 1937

# SANAD

Rajacharita Visharada, Rao Sahib *Conjeevaram Hayavadana Rao,* B.A., B.L. Editor, Mysore Economic Journal and Director and Secretary of the Bangalore Printing and Publishing Company, Mysore, I hereby confer upon you the title of *Rao Bahadur* as a personal distinction.

New Delhi
the 1st January 1942

—*Linlithgow*
Viceroy of India

# ರಾಯರ ಬಗ್ಗೆ ಅಭಿಪ್ರಾಯಗಳು

1

I greatly valued his industry, ability and devotion to duty. He has rendered appreciable service by his activities to his fellowmen in Mysore.

*—Sir M. Visweswaraya*

2

He was one of those old stalwarts who had the benefit of sound, allround education for keen observation, clear thinking and precise expression.

*—T. Singaravelu Mudaliar*

3

Conversation with him was itself an education.

*—V. Ganesh Iyer*

4

His sympathies were always with the poor and he helped many a young man to find his feet.

*—Dr. D. V. Gundappa*

5

All of us are poorer today, having lost a loving friend and true devotee of literature and culture and all those high and noble ideals which the civilization of this ancient land has upheld throughout the ages.

*—Viswa Bandhu Sastri*

6

I came to have a very high regard for his intelligence and his businesslike habits. He was a rare individual who could combine scholarship and a flair for business.

He was a respected journalist of a high order and an author of ripe scholarship.

He was friendly, endowed with pleasant manners and a delightfully conversationalist, he was an institution by himself in his own way.

*—Prof. A. R. Wadia*

7

He was humble and unassuming, and far from anxious to show off. I was impressed by the versatility and range of interests and his competence in everyone of them. He was equally at home in politics and economics, in literature as well as in historical and sanskrit scholarship.

His revision of the Mysore Gazetteer in several bulky volumes bears testimony to his industry and width of knowledge. His publication of the massive Srikara

Bhashya on the Brahma Sutras with translation, speaks to his familiarity with and mastery of our ancient literature. It was under his guidance that the Bangalore Press brought out six volumes of Wilson's translation of Rigveda, as well as the text of Ashtekar's edition of Shankara's Commentaries of the Ten Upanishads in two volumes.

I have always had the highest respect and admiration for him at all times for the great qualities of head and heart of one who combined Vidya with Vinaya.

*—K. Guru Dutt, DPI*

8

My uncle Dr. M. Visweswaraya had a very high regard and appreciation for his vast knowledge on world matters.

After writing and receiving replies from well known universities all over the world, literature about their institutions, subjects taught etc., his report to start Sri Krishna Rajendra Silver Jubilee Technological Institute, speaks of his capacity as a practical man.

For writing the Mysore Gazetteer he spent years to trace records which were not easily available. This speaks of his remarkable perseverance to seek knowledge.

***—Prof. M. R. Krishna Murthy***

## 9

Rao was an ardent worker seeking to harmonize tradition with modernity. He was a pioneer in economic journalism and he had a burning passion in pleading for rapid rural development.

He was truly encyclopaedic in width and depth of his interests. I drew deeply from the issues of Mysore Economic Journal to speed up rural development and it was a comprehensive source book to draw for exploiting leading issues used in planning and development.

At the deliberations of the senate and other meetings of the Mysore University, his observations were heeded with great attention and interest.

Both the State and the British governments of the day recognised his talents and services and decorated him with titles and other honours. People are convinced that Rao's endeavours and experience were aimed to project historic sense towards the causes of economic and social progress.

*—Prof. K. B. Madhava*

## 10

He was a genius in his own right. In the fields of literary, social and journalistic activities, there was none to beat him.

To visit him in his house was a pilgrimage. There was not many social and cultural institutions in which he was not interested, his interest being always to improve them for the public good.

He was held in the highest esteem by Sir M. Visweswaraya and Sir Mirza Ismail the Dewans of Mysore.

He was a great gentleman, a great patriot and an indefatigable worker.

*—C. N. Narasinga Rao*

11

He was really a great man. In the political Reforms Committee our view points were poles asunder. But once when he congradulated for my note of dissent I was surprised. He appreciated the qualities of the opponent.

He possessed the great objective qualities of a historian, factual assessment of an economist and uptodate knowledge of a journalist.

His reedited Gazetteer speaks of his vast knowledge and learning and he was a living encyclopaedia.

That is why the Dewans honoured him and sought his advice on all important matters.

*—Bhoopalam R. Chandrashekarayya, M.P.*



ಮೈಸೂರಿನಲ್ಲಿ ನಡೆದ ಶೀಘ್ರಲಿಪಿಕಾರರ ಸಮ್ಮೇಳನ



ಪೂನಾದ ಕಾಮನ್ ವೆಲ್ತ್ ಜೀವವಿಮಾ ಕಂಪೆನಿಯ ಅಧ್ಯಕ್ಷ ಎನ್. ಸಿ. ಕೇಲ್ಕರ್‌ರವರಿಗೆ
ಗೌರವಾರ್ಥ ಏರ್ಪಡಿಸಿದ ಔತಣ ಕೂಟದಲ್ಲಿ



ರೆಡ್‌ಕ್ರಾಸ್ ಸಭೆಯಲ್ಲಿ ರಾಯರು



ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ನಡೆದ ಐತಿಹಾಸಿಕ ರಾಜಕೀಯ ಸಮ್ಮೇಳನದಲ್ಲಿ
ಅಧ್ಯಕ್ಷ ಜಾನ್‌ಸಾರ್ಜೆಂಟ್ ಮತ್ತು ಮೈಸೂರಿನ ಮಹಾರಾಜ ಜಯಚಾಮರಾಜೇಂದ್ರ ಒಡೆಯರ್‌ರವರೊಂದಿಗೆ



1928ರಲ್ಲಿ ಬೆಂಗಳೂರು ಮುದ್ರಣ–ಪ್ರಕಟನ ಸಂಸ್ಥೆಯ ಸಭೆ



ಮೈಸೂರಿನ ಯುವರಾಜ ಕಂಠೀರವ ನರಸಿಂಹರಾಜ ಒಡೆಯರು
1930ರಲ್ಲಿ ಬೆಂಗಳೂರು ಮುದ್ರಣಾಲಯಕ್ಕೆ ಭೇಟಿ ಕೊಟ್ಟದ್ದು



1936ರಲ್ಲಿ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರಿಗೆ ಕೆ.ಸಿ.ಐ. ಬಿರುದು ಬಂದುದರ
ಗೌರವಾರ್ಥ ಏರ್ಪಡಿಸಿದ ಔತಣ ಕೂಟದಲ್ಲಿ



1938ರಲ್ಲಿ ರೇಷ್ಮೆ ಕೈಗಾರಿಕೆಯ ತೆರಿಗೆ ಮಂಡಲಿಯ ಸದಸ್ಯರು
ಮೈಸೂರು ವಾಣಿಜ್ಯ ಮಂಡಲಿ ಸಭೆಗೆ ಭೇಟಿ ಇತ್ತುದು



1941ರಲ್ಲಿ ಬೆಂಗಳೂರಿನ ಮೈಸೂರು ವಾಣಿಜ್ಯ ಮಂಡಲಿಯ ವಾರ್ಷಿಕ ಸಭೆಯಲ್ಲಿ
ರಾಯರು ಏರ್ಪಡಿಸಿದ್ದ ಸನ್ಮಾನ ಸಮಾರಂಭದಲ್ಲಿ



ಮೈಸೂರಿನ ಮಹಾರಾಜ ಜಯಚಾಮರಾಜೇಂದ್ರ ಒಡೆಯರ್ ಅವರೊಂದಿಗೆ
ಸಂಭಾಷಣೆಯಲಿ ನಿರತರಾಗಿರುವದು